**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 584 ಸಅಸೇ 2011 ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 585 ಸಅಸೇ 2010, ದಿ:14-12-2010ರಲ್ಲಿ ಉನ್ನತೀಕರೀಸಲಾಗಿರುವ ರಾಜ್ಯ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಅಪರ ಮುಖ್ಯ ಕಾರ್ಯದರ್ಶಿ, ಸಿಆಸುಇ (ಚುನಾವಣೆಗಳು) ಹುದ್ದೆಯನ್ನು ದಿನಾಂಕ: 26-11-2011ರಿಂದ ಒಂದು ವರ್ಷದ ಅವಧಿಗೆ ಅಥವಾ ಅಧಿಕಾರಿಯು ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಮುಂದುವರೆಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96: ದಿನಾಂಕ: 10-07-1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆಯೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

ಪಿ.ಆರ್.ನಂ:907 (ಸೇವೆಗಳು-3)

## ಕಾರ್ಮಿಕ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಕಾಇ 238 ಇಟಿಐ 2011, ಬೆಂಗಳೂರು. ದಿನಾಂಕ: 14-03-2012**

ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ **"ಶ್ರೀ ದಲೈಲಾಮ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ"** ಎನ್ನುವುದಾಗಿ ಹೆಸರನ್ನು ಇಡಲು ಮಂಜೂರಾತಿ ನೀಡಲಾಗಿರುವ ಸರ್ಕಾರಿ ಆದೇಶ ಸಂಖ್ಯೆ: ಕಾಇ 238 ಇಟಿಐ 2011 ರ ದಿನಾಂಕವನ್ನು 25-02-2011ರ ಬದಲಾಗಿ 25-02-2012 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಪಿ.ಆರ್. 908 ಕಾರ್ಮಿಕ ಇಲಾಖೆ, (ಉದ್ಯೋಗ ಮತ್ತು ತರಬೇತಿ)

## ಇಂಧನ ಸಚಿವಾಲಯ

**ವಿಷಯ :** ಮೆ: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 19.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 2.1 ಮೆ.ವ್ಯಾ. ಸಾಮರ್ಥ್ಯವನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 498 ಎನ್‌ಸಿಇ 2006, ದಿ: 27-12-2007.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 39 ಎನ್‌ಸಿಇ 2009, ದಿನಾಂಕ: 07-10-2009.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GE-2.1 MW-AEEPL/2012/615, ದಿನಾಂಕ: 23/24-02-2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಏಬಲ್‌ಟೆಕ್ ಇಂಜಿನೀಯರ್ಸ್ ಕಂಪನಿಗೆ ಹಾವೇರಿ ಜಿಲ್ಲೆಯಲ್ಲಿ 6.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಮೆ:: ಏಬಲ್‌ಟೆಕ್ ಇಂಜಿನೀಯರ್ಸ್ ಲಿಮಿಟೆಡ್ ರವರಿಗೆ ಮಂಜೂರಾಗಿದ್ದ 6.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಗೆ ವರ್ಗಾಯಿಸಲಾಗಿತ್ತು ಹಾಗೂ ಸಾಮರ್ಥ್ಯವನ್ನು 6.60 ಮೆ.ವ್ಯಾ.ನಿಂದ 19.8 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನಲ್ಲಿ ಮಂಜೂರಾಗಿದ್ದ 19.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ಕಂಪನಿಗೆ ವರ್ಗಾಯಿಸಲು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಯೋಜನಾ ಸ್ಥಳವು ಕಂದಾಯ ಜಮೀನಾಗಿರುತ್ತದೆ, ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡಲಾಗುತ್ತದೆ ಹಾಗೂ ಯೋಜನೆಯನ್ನು 30-06-2012ರೊಳಗಾಗಿ ಅನುಷ್ಠಾನಗೊಳಿಸಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 113 ಎನ್‌ಸಿಇ 2012, ಬೆಂಗಳೂರು, ದಿನಾಂಕ: 14-03-2012**

ಮೆ:: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 19.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **2.1 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ಕಂಪನಿಯವರಿಗೆ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ:-

**Land details of the project**

| Village Name | Taluk & District | MW | Land Survey Number | Land Sy.No | Extent in land | WTG Location No. | Latitude, Longitude and Ridge peaks |
|---|---|---|---|---|---|---|---|
| Chinnamulagundha | Hirkerur /Haveri | 2.1 | 03 | 1 No. | 2 Acres Per WTG | RAN-002 | Latitude: $14^0$34'54.4"- N<br>Longitude: $75^0$24'23.9"E<br>Ridge peaks: 700m |

1. **ಮೆ:: ಗಿರಿರಾಜ್ ಎಂಟರ್‌ಪ್ರೈಸಸ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ:: ಗಿರಿರಾಜ್ ಎಂಟರ್‌ಪ್ರೈಸಸ್** ರವರು ನೀತಿ ನಿಯಮಗಳಿಗನುಗಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ.
3. ಸದರಿ ಯೋಜನೆಯನ್ನು ದಿನಾಂಕ: 30–06–2012**ರೊಳಗಾಗಿ** ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (Committment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್: 909 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 19.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 6.3 ಮೆ.ವ್ಯಾ. ಸಾಮರ್ಥ್ಯವನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 498 ಎನ್‌ಸಿಇ 2006, ದಿ: 27–12–2007.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 39 ಎನ್‌ಸಿಇ 2009, ದಿನಾಂಕ: 07–10–2009.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GE-6.3 MW-AEEPL/2012/605, ದಿನಾಂಕ: 21/23–02–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಏಬಲ್‌ಟೆಕ್ ಇಂಜಿನೀಯರ್ಸ್ ಕಂಪನಿಗೆ ಹಾವೇರಿ ಜಿಲ್ಲೆಯಲ್ಲಿ 6.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಮೆ:: ಏಬಲ್‌ಟೆಕ್ ಇಂಜಿನೀಯರ್ಸ್ ಲಿಮಿಟೆಡ್ ರವರಿಗೆ ಮಂಜೂರಾಗಿದ್ದ 6.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಗೆ ವರ್ಗಾಯಿಸಲಾಗಿತ್ತು ಹಾಗೂ ಸಾಮರ್ಥ್ಯವನ್ನು 6.60 ಮೆ.ವ್ಯಾ. ನಿಂದ 19.8 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನಲ್ಲಿ ಮಂಜೂರಾಗಿದ್ದ 19.8 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 6.3 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ಕಂಪನಿಗೆ ವರ್ಗಾಯಿಸಲು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಯೋಜನಾ ಸ್ಥಳವು ಕಂದಾಯ ಜಮೀನಾಗಿರುತ್ತದೆ. ಉತ್ಪಾದಿತ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡಲಾಗುತ್ತದೆ ಹಾಗೂ ಯೋಜನೆಯನ್ನು 30–06–2010ರೊಳಗಾಗಿ ಅನುಷ್ಠಾನಗೊಳಿಸಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 112 ಎನ್‌ಸಿಇ 2012, ಬೆಂಗಳೂರು, ದಿನಾಂಕ: 14–03–2012**

ಮೆ: ಏಬಲ್‌ಟೆಕ್ ಎಲೆಕ್ಟ್ರೊ ಇಂಜಿನೀಯರ್ಸ್ (ಪ್ರೈ) ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 19.8 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **6.3 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ಕಂಪನಿಯವರಿಗೆ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ:–

**Land details of the project**

| Village Name | Taluk & District | MW | Land Survey Number | Land Sy.No | Extent in land | WTG Location No. | Latitude, Longitude and Ridge peaks |
|---|---|---|---|---|---|---|---|
| Hirebudihal | Hirkerur /Haveri | 2.1 | 46 | 1 No. | 2 Acres Per WTG | RAN-007 | Latitude: $14^0$33'42.0"-N<br>Longitude: $75^0$28'30.6"-E<br>Ridge peaks: 680m |

| | | | | | | | |
|---|---|---|---|---|---|---|---|
| Aladhgere | Hirkerur /Haveri | 2.1 | 50 | 1 No. | 2 Acres Per WTG | RAN-008 | Latitude: 14⁰33'34.9"-N<br>Longitude: 75⁰28'41"-E<br>Ridge peaks: 691m |
| Aladhgere | Hirkerur /Haveri | 2.1 | 50 | 1 No. | 2 Acres Per WTG | RAN-009 | Latitude: 14⁰33'27.2"-N<br>Longitude: 75⁰28'57.3"-E<br>Ridge peaks: 680m |
| | | 6.3 | | 3 Nos. | 6 Acres | | |

1. **ಮೆ: ಗಿರಿರಾಜ್ ಎಂಟರ್‌ಪ್ರೈಸಸ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ: ಗಿರಿರಾಜ್ ಎಂಟರ್‌ಪ್ರೈಸಸ್** ರವರು ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ.
3. ಸದರಿ ಯೋಜನೆಯನ್ನು ದಿನಾಂಕ: 30–06–2012**ರೊಳಗಾಗಿ** ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್: 910 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ದೀಪಕ್ ಎಂ ಪಾಟೀಲ್ ಇವರ ರದ್ದಪಡಿಸಲಾಗಿರುವ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಎನ್ 360 ಎನ್‌ಸಿಇ 2004, ದಿ: 21–12–2004.
2. ಸರ್ಕಾರದ ಆದೇಶ ಸಂಖ್ಯೆ: ಇಎನ್ 213 ಎನ್‌ಸಿಇ 2010, ದಿನಾಂಕ: 14–12–2010.
3. ಮೆ॥ ದೀಪಕ್ ಎಂ ಪಾಟೀಲ್ ಇವರ ಮನವಿ ದಿನಾಂಕ: 01–02–2012.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಡಿಎಂಪಿ–5.25 ಮೆ.ವ್ಯಾ./2012/352, ದಿನಾಂಕ: 01/03–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ದೀಪಕ್ ಎಂ ಪಾಟೀಲ್ ಕಂಪನಿಗೆ ಗದಗ ಜಿಲ್ಲೆಯ ಕಪ್ಪತಗುಡ್ಡದಲ್ಲಿ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ದೀಪಕ್ ಎಂ ಪಾಟೀಲ್ ಕಂಪನಿಗೆ ಗದಗ ಜಿಲ್ಲೆಯ ಕಪ್ಪತಗುಡ್ಡದಲ್ಲಿ ಹಂಚಿಕೆ ಮಾಡಿದ್ದ 5.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದುಪಡಿಸಲಾಗಿತ್ತು.

ಅಭಿವೃದ್ಧಿದಾರರು ಮೇಲೆ (3) ರಲ್ಲಿ ಓದಲಾದ ಮನವಿಯಲ್ಲಿ, ಈ ಯೋಜನೆಯ ಅನುಷ್ಠಾನ ಕುರಿತಂತೆ ವಿವಿಧ ಇಲಾಖೆಗಳೊಂದಿಗೆ ಮಂಜೂರಾತಿಗಾಗಿ ಸತತ ಪ್ರಯತ್ನ ನಡೆಸುತ್ತಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಸದರಿ ಯೋಜನೆಯ ಭಾಗವು ಅರಣ್ಯ ಭೂಮಿಯಲ್ಲಿ ಬರುವುದರಿಂದ ಅರಣ್ಯ ಇಲಾಖೆಯಿಂದ ಅನುಮೋದನೆ ಪಡೆಯಲು ವಿಳಂಬವಾಗುತ್ತಿರುವ ಕಾರಣದಿಂದಾಗಿ ಈ ಯೋಜನೆಗೆ ಅನುಷ್ಠಾನದಲ್ಲಿ ವಿಳಂಬವಾಗಿದೆಯೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಇವರು ಮೆ॥ ದೀಪಕ್ ಎಂ ಪಾಟೀಲ್ ಕಂಪನಿಯ ರದ್ದುಪಡಿಸಿರುವ 5.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಪೂರ್ವ ಸ್ಥಿತಿಗೆ ತಂದು ಕಾಲಾವಕಾಶವನ್ನು ದಿನಾಂಕ: 31–12–2013 ರವರೆಗೆ ವಿಸ್ತರಿಸಲು ಅಭಿವೃದ್ಧಿದಾರರ ಕೋರಿಕೆಯನ್ನು ಪರಿಶೀಲಿಸಿ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 421 ಎನ್‌ಸಿಇ 2011, ಬೆಂಗಳೂರು, ದಿನಾಂಕ: 15–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರಿ ಆದೇಶ ಸಂಖ್ಯೆ: ಇಎನ್ 213 ಎನ್‌ಸಿಇ 2010 ದಿನಾಂಕ: 14–12–2010ರಲ್ಲಿ ಮೆ॥ ದೀಪಕ್ ಎಂ ಪಾಟೀಲ್ ಕಂಪನಿಗೆ ಗದಗ ಜಿಲ್ಲೆಯ ಕಪ್ಪತಗುಡ್ಡದಲ್ಲಿ 5.25 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಿರುವುದನ್ನು ಪೂರ್ವ ಸ್ಥಿತಿಗೆ ತಂದು ಈ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ: 31–12–2013 ರವರೆಗೆ ವಿಸ್ತರಿಸಲಾಗಿದೆ:–

ದಿನಾಂಕ: 31–12–2013ರ ನಂತರ ಯಾವುದೇ ಕಾರಣಕ್ಕೂ ಕಾಲಾವಕಾಶವನ್ನು ವಿಸ್ತರಿಸಲಾಗುವುದಿಲ್ಲ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್: 911 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ವಿಜಯಲಕ್ಷ್ಮಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 15 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/VHPPL-15MW(Chitradurga)/2011/566, ದಿನಾಂಕ: 22–01/11–02–2011.
2. ದಿನಾಂಕ: 27–05–2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/VHPPL-15MW/2011/423, ದಿನಾಂಕ: 06/07–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ವಿಜಯಲಕ್ಷ್ಮಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿತ್ರದುರ್ಗ ಜಿಲ್ಲೆಯ, ದೊನೆಹಳ್ಳಿ, ಅಕ್ಕನೂರು, ಹೊನ್ನಮರಡಿ, ಗೌರಮ್ಮನಹಳ್ಳಿ ಮತ್ತು ತೋರಣಗಟ್ಟಿ ಗ್ರಾಮಗಳಲ್ಲಿ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಮತ್ತು ಈ ಯೋಜನೆಯಿಂದ ಉತ್ಪಾದನೆಯಾಗುವ ವಿದ್ಯುತ್‌ನ್ನು ವಿದ್ಯುತ್ ಖರೀದಿ ಒಪ್ಪಂದ ಮೂಲಕ ವಿದ್ಯುತ್ ಸರಬರಾಜು ಕಂಪನಿಗಳಿಗೆ ಮಾರಾಟ ಮಾಡುವುದಾಗಿ ಹಾಗೂ ಯೋಜನೆಯನ್ನು 2012–2013 ಮತ್ತು 2013–2014ರಲ್ಲಿ ಅನುಷ್ಠಾನಗೊಳಿಸುವುದಾಗಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ದಿನಾಂಕ: 27–05–2011ರಂದು ನಡೆದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ವಿಜಯಲಕ್ಷ್ಮಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತಾತ್ಕಾಲಿಕವಾಗಿಯಾದರೂ ಸರ್ವೆ ಸಂಖ್ಯೆಗಳನ್ನು ನೀಡುವ ಷರತ್ತಿಗೊಳಪಟ್ಟು ಹಂಚಿಕೆ ಮಾಡಲು ಹಂಚಿಕೆ ಸಮಿತಿಯ ಪರಿಗಣಿಸಿರುತ್ತದೆ.

ಅದರಂತೆ ಅಭಿವೃದ್ಧಿದಾರರಿಂದ ಯೋಜನಾ ಸ್ಥಳದ ಸರ್ವೆ ಸಂಖ್ಯೆಗಳನ್ನು ಪಡೆದು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದೊಂದಿಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಈ ಯೋಜನೆಗೆ ಯಾವುದೇ ಸರ್ಕಾರಿ ಅಥವಾ ಅರಣ್ಯ ಜಮೀನಿನ ಅವಶ್ಯಕತೆಯಿರುವುದಿಲ್ಲ ಮತ್ತು ಉತ್ಪಾದನೆಯಾಗುವ ವಿದ್ಯುತ್ತನ್ನು ಎಸ್ಕಾಂಗಳಿಗೆ ಮಾರಾಟ ಮಾಡುವುದಾಗಿ ತಿಳಿಸಿದ್ದು, ಹಂಚಿಕೆ ಆದೇಶವನ್ನು ನೀಡಬಹುದಾಗಿದೆಯೆಂದು ತಿಳಿಸಿರುತ್ತಾರೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 120 ಎನ್‌ಸಿಇ 2011, ಬೆಂಗಳೂರು, ದಿನಾಂಕ: 13–03–2012**

ಮೆ: ವಿಜಯಲಕ್ಷ್ಮಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ, ದೊನೆಹಳ್ಳಿ, ಅಕ್ಕನೂರು, ಹೊನ್ನಮರಡಿ, ಗೌರಮ್ಮನಹಳ್ಳಿ ಮತ್ತು ತೋರಣಗಟ್ಟಿ ಪ್ರದೇಶಗಳಲ್ಲಿ 15.00 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ನಿಬಂಧನೆಗೊಳಪಟ್ಟು **ಹಂಚಿಕೆ** ಮಾಡಿದೆ:–

| Sl. No. | Topo Sheet No | Proposed Capacity in MW | Near by villages of the proposed area and district | Geoprahical area description of the project |
|---|---|---|---|---|
| 1 | 57 B/7 | 15 MW (30 Nos x 500KW) | Donehalli, Akkanuru, Honnamardi, Gaurammanahalli, Toranagatti villages of Chitradurga District | Identification area is ground level plain would be having agricultural activities. The NH 13 runs diagonally in the area along with Power lines, the area is situated on the South of Donehalli and East of Torangatti has gentle elevation varying from 640 to 680 Mt.,. Further, it has water body and a stream runs across is called as Janagahalli and held in the following Geographical co-ordinates:<br><br>Latitude: 14°46'07"- 13°50'10"- N<br>Longitude: 77°10'51"- 77°15'0"-E<br>Ridge peaks: 672,644,661,632,638 & 664 Amsl. |
| | | 15.00 MW | | |

1. ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಂಡಿಕೆ ಮಾಡಿಕೊಳ್ಳತಕ್ಕದ್ದು, ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಆಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚುಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಖಾಸಗಿ ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರವನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
8. ಅಭಿವೃದ್ಧಿದಾರರು ಈ ಯೋಜನೆಯನ್ನು 2013-14ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು ಹಾಗೂ ಅದರಂತೆ, ಕೆ.ಆರ್.ಇ.ಡಿ.ಎಲ್.ಗೆ ಮುಚ್ಚಳಿಗೆ ಬರೆದುಕೊಡತಕ್ಕದ್ದು.
9. ಸರ್ಕಾರಿ ಆದೇಶ ಸಂ:ಇಎನ್ 95 ಇಬಿಎಸ್ 2009 ದಿ:29-12-2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.
10. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
11. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
12. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್: 912 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಸ್ವಯಂಭೂ ಪವರ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಬಂಡಿಹೊಳೆ ಕಿ.ಜ.ವಿ./2010/792, ದಿನಾಂಕ: 24-02/19-03-2010 ಮತ್ತು ಕೆಆರ್‌ಇಡಿ /08/SH-689/Bandi/07, ದಿನಾಂಕ: 29-12-2010, 01-01-2011.

2. ದಿನಾಂಕ: 25-01-2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಸ್ವಯಂಭೂ ಪವರ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಂಗಳೂರು ಜಿಲ್ಲೆಯ, ಎನ್.ಆರ್. ಪುರ ತಾಲ್ಲೂಕಿನ ಬಾಳೆಹೊನ್ನೂರು ಬಳಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ನಡವಳಿಯಲ್ಲಿ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ಸ್ವಯಂಭೂ ಪವರ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಂಗಳೂರು ಜಿಲ್ಲೆಯಲ್ಲಿ ಎನ್.ಆರ್. ಪುರ ತಾಲ್ಲೂಕಿನ ಭದ್ರಾನದಿ ಉಪನದಿಯಾದ

ಬಂಡಿಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಬಂಡಿಹೊಳೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 117 ಎನ್‌ಸಿಇ 2010, ಬೆಂಗಳೂರು, ದಿನಾಂಕ: 13–03–2012**

**ಮೆ: ಸ್ವಯಂಭೂ ಪವರ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್** ಇವರಿಗೆ ಚಿಕ್ಕಮಂಗಳೂರು ಜಿಲ್ಲೆಯಲ್ಲಿ, ಎನ್.ಆರ್. ಪುರ ತಾಲ್ಲೂಕಿನ ಭದ್ರಾನದಿ ಉಪನದಿಯಾದ ಬಂಡಿಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ **'ಬಂಡಿಹೊಳೆ ಕಿರು ಜಲ ವಿದ್ಯುತ್'** ಯೋಜನೆಯನ್ನು (ಹಂತ–1ರ Weir Latitude: 13°23'29" Longitude 75°26'15". ವಿದ್ಯುತ್ ಸ್ಥಾವರದ Latitude: 13°24'46" Longitude: 75°27'14" ಹಂತ–2ರ Weir Latitude: 13°24'09" Longitude: 75°27'45". ವಿದ್ಯುತ್ ಸ್ಥಾವರದ Latitude: 13°24'34" Longitude: 75°28'38") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1. ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇತ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.
3. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06–01–212 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
4. ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕಣ ಶುಲ್ಕವನ್ನು ತುಂಬುವುದು.
5. ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.
6. ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.
7. ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡೆಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡೆಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
13. ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಪೂರ್ವದಲ್ಲಿ ಸಂಬಂಧಿಸಿದ ಪ್ರಾದೇಶಿಕ ಮತ್ತು ವನ್ಯಜೀವಿ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಸಹಮತಿ ಪಡೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್: 913

## ಶಿಕ್ಷಣ ಸಚಿವಾಲಯ

ವಿಷಯ : ಶ್ರೀ ಜಿ.ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರ ಮೇಲಿನ ಆರೋಪಗಳಿಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

ಓದಲಾಗಿದೆ :
1. ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ : ಸಿ5/ಜಿ.ಟಿ.ತ./ದೂರು/59/2010–11, ದಿನಾಂಕ : 21–09–2011.
2. ಸರ್ಕಾರದ ಪತ್ರ ಸಂಖ್ಯೆ : ಇಡಿ 54 ಡಿಜಿಓ 2011 ದಿನಾಂಕ : 10–11–2011.
3. ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ : ಸಿ5/ಜಿ.ಟಿ.ತ./ದೂರು/59/2010–11, ದಿನಾಂಕ : 28–11–2011.
4. ಸರ್ಕಾರದ ಕಾರಣ ಕೇಳುವ ನೋಟಿಸು ಸಂಖ್ಯೆ : ಇಡಿ 54 ಡಿಜಿಓ 2011 ದಿನಾಂಕ : 16–01–2012.
5. ಶ್ರೀ ಜಿ.ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರ ರಕ್ಷಣಾ ಹೇಳಿಕೆ ದಿನಾಂಕ : 25–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ : 21–09–2011 ರ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ವರದಿಯಲ್ಲಿ ಶೀ ಜಿ.ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರ

ಮೇಲಿನ ಅಪಾದನೆಗಳನ್ನು ಕುರಿತು ವಿಚಾರಣೆಯನ್ನು ಸಹ ನಿರ್ದೇಶಕರು (ಆಡಳಿತ), ಇವರು ದಿನಾಂಕ : 07–09–2011 ಹಾಗೂ 08–09–02011 ರಂದು ಜರುಗಿಸಿದ್ದು, ಸದರಿ ಅಧಿಕಾರಿಯು ಈ ಕೆಳಕಂಡ ಗಂಭೀರವಾದ ಕರ್ತವ್ಯ ಲೋಪವನ್ನು ಎಸಗಿರುವುದು ಕಂಡು ಬಂದಿರುವುದಾಗಿ ತಿಳಿಸಿ ಸದರಿ ಅಧಿಕಾರಿಯನ್ನು ಅಮಾನತ್ತುಗೊಳಿಸಿ ಶಿಸ್ತು ಕ್ರಮ ಜರುಗಿಸುವಂತೆ ಕೋರಿರುತ್ತಾರೆ.

1. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಶಾಲಾ ಬ್ಯಾಗ್ ಮತ್ತು ನೋಟ್‌ಬುಕ್‌ಗಳ ವಿತರಣೆಗೆ ಸಂಬಂಧಿಸಿದ ಅನುದಾನವನ್ನು ದುರುಪಯೋಗ ಪಡಿಸಿಕೊಂಡಿರುವುದು.
2. ಬಾಲಾ ಯೋಜನೆಯಡಿಯಲ್ಲಿ ಗ್ರೀನ್ ಬೋರ್ಡ್‌ಗಳನ್ನು ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಗಮನಕ್ಕೆ ತರದೆ ಹೆಚ್ಚಿನ ದರದಲ್ಲಿ ಖರೀದಿಸಿರುವುದು.
3. ಶಾಲೆಗಳಿಗೆ ಬೆಂಕಿ ಆರಿಸುವ ಉಪಕರಣಗಳನ್ನು ಸಮಿತಿಯ ಗಮನಕ್ಕೆ ತರದೇ ಖರೀದಿ ಮಾಡಿರುತ್ತಾರೆ.
4. ಋತುಮಾನ ಶಾಲೆ/ಆಶಾಕಿರಣ ಶಾಲೆಗಳಲ್ಲಿ ಖೊಟ್ಟಿ ಹಾಜರಾತಿ ನೀಡಿ ಅನುದಾನವನ್ನು ದುರ್ಬಳಕೆ ಮಾಡಿದ್ದಾರೆ.
5. ಶ್ರೀ ಜಿ.ಟಿ. ತಳಕೇರಿ, ಇವರ ವಿರುದ್ಧ ಕಳೆದ ತಿಂಗಳ ರಾಜ್ಯ ಮಟ್ಟದ ಪತ್ರಿಕೆಗಳಲ್ಲಿ ಸಹಾ ಹಣ ದುರುಪಯೋಗಗಳ ಬಗ್ಗೆ ವರದಿ ಬಂದಿರುತ್ತದೆ.
6. ಸಹ ನಿರ್ದೇಶಕರು (ಆಡಳಿತ) ಇವರು ಕಡತಗಳನ್ನು ಪರಿಶೀಲನೆ ಮಾಡಿ ಮತ್ತು ವಿಜಾಪುರದಲ್ಲಿ ಸ್ಥಳೀಯವಾಗಿ ಪರಿಶೀಲನೆ ಕೈಗೊಂಡ ನಂತರ ವರದಿಯಲ್ಲಿ ಕೆಲವು ಅಂಶಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.
   i. 2010–11ನೇ ಸಾಲಿನ ಶಾಲಾ ಮಕ್ಕಳಿಗೆ ವಿತರಿಸಬೇಕಾದ ಬ್ಯಾಗ್ ಹಾಗೂ ನೋಟ್ ಪುಸ್ತಕ ಹಂಚಿಕೆ ವಿವರಿಸುವುದಾದರೆ, ದಿನಾಂಕ : 15–06–2010 ರಂದು ಶಾಲಾ ಬ್ಯಾಗ್ ಮತ್ತು ನೋಟ್ ಪುಸ್ತಕಗಳನ್ನು ಖರೀದಿಸಿ ಶಾಲೆಗಳಲ್ಲಿನ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ನೀಡಲು ಕಟ್ಟುನಿಟ್ಟಾಗಿ ಸೂಚನೆ ನೀಡಲಾಗಿದೆ. ಕ್ಷೇತ್ರ ಶಿಕ್ಷಣಾಧಿಕಾರಿಗಳ ಖಾತೆಗೆ ಮೊದಲನೇ ಕಂತು ರೂ 8.71 ಲಕ್ಷಗಳು ದಿನಾಂಕ : 14–08–2010 ರಂದು ಬಿಡುಗಡೆ ಆಗಿದ್ದು 2ನೇ ಕಂತು ರೂ. 1.18 ಲಕ್ಷಗಳು ದಿನಾಂಕ : 25–03–2011 ರಂದು ಬಿಡುಗಡೆಯಾಗಿತ್ತು. 3ನೇ ಕಂತು ರೂ. 0.35 ಲಕ್ಷಗಳು ದಿನಾಂಕ : 19–04–2011ರಂದು ಬಿಡುಗಡೆಯಾಗಿರುತ್ತದೆ. 2010–11ನೇ ಸಾಲಿಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳಿಗೆ ಶಾಲಾ ಬ್ಯಾಗ್ ಮತ್ತು ನೋಟ್‌ಬುಕ್‌ಗಳನ್ನು ಪೂರೈಸುವ ಕೆಲಸ ಇನ್ನೂ ಆಗಿಲ್ಲ ಸರ್ಕಾರದಿಂದ ವಹಿಸಿರುವ ಈ ವಿಶೇಷ ಕಾರ್ಯಕ್ರಮವನ್ನು ಜಾರಿಗೊಳಿಸುವಲ್ಲಿ ಈ ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿಫಲರಾಗಿರುತ್ತಾರೆ.
   ii. ಬಾಲಾ ಯೋಜನೆ ಮತ್ತು ಬೆಂಕಿ ಆರಿಸುವ ಉಪಕರಣಗಳ ಬಗ್ಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳಿಗೆ ಹಣ ಬಿಡುಗಡೆಗೊಳಿಸಿದ್ದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಹಂತದಲ್ಲಿ ಈ ಕುರಿತು ನಿರ್ವಹಿಸಿರುವ ಬಗ್ಗೆ ದಾಖಲೆಗಳು ಇಲ್ಲ.
   iii. ಋತುಮಾನ ಶಾಲೆ ಮತ್ತು ಆಶಾಕಿರಣ ಶಾಲೆಗಳ ಬಗೆಗಿನ ಅಪಾದನೆಗಳ ಪೂರಕವಾಗಿ ಯಾವುದೇ ಅಪವ್ಯಯ ಆದ ಬಗ್ಗೆ ಕಂಡು ಬಂದಿಲ್ಲವೆಂದು ತಿಳಿಸಿದ್ದಾರೆ. ಮತ್ತು ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ ಸದಸ್ಯರಿಗೆ ತರಬೇತಿ ನೀಡುವ ಬಗ್ಗೆ ರೂ. 5.54 ಲಕ್ಷಗಳನ್ನು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯಿಂದ ದಿನಾಂಕ : 27–07–2011 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಜಮೆಯಾಗಿರುತ್ತದೆ. ಈ ತರಬೇತಿ ಕಾರ್ಯಕ್ರಮ ಇನ್ನೂ ಪೂರ್ಣಗೊಂಡಿಲ್ಲವೆಂದು ಸಹ ನಿರ್ದೇಶಕರು (ಆಡಳಿತ) ತಿಳಿಸಿರುತ್ತಾರೆ.
   iv. 2011–12 ನೇ ಸಾಲಿನ ಪ್ರಾಥಮಿಕ ಶಾಲಾ ಶಿಕ್ಷಕರ ನಿಯೋಜನೆ ಕಡತ ಪರಿಶೀಲಿಸಲಾಗಿ ಒಟ್ಟು 39 ಶಿಕ್ಷಕರ ನಿಯೋಜನೆ ಮಾಡಿರುವುದು ತಿಳಿದುಬಂದಿದ್ದು ಈ ನಿಯೋಜನೆ ಯಾವುದೇ ಶಾಲೆಯ ಮಕ್ಕಳ ಹಿತದೃಷ್ಟಿಯಿಂದ ಕೂಡಿರುತ್ತದೆ ಎಂದು ತಿಳಿದು ಬಂದಿರುವುದಿಲ್ಲ. ಕೆಲವೊಂದು ಶಿಕ್ಷಕರ ನಿಯೋಜನೆಗಳನ್ನು 2008–09, 2009–10, 2010–11 ಮತ್ತು 2011–12ನೇ ಸಾಲಿನ ಸತತ ನಾಲ್ಕು ವರ್ಷಗಳವರೆಗೆ ನಿಯೋಜನೆ ಮುಂದುವರೆಸಿರುತ್ತಾರೆ. ಇದು ಶಿಕ್ಷಣ ಕಾಯ್ದೆಗೆ ವಿರುದ್ಧವಾಗಿರುತ್ತದೆ.
   v. ಶ್ರೀ ಜಿ.ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಬಿಜಾಪುರ ಗ್ರಾಮೀಣ ಇವರ ಮೇಲಿನ ದೂರುಗಳನ್ನು ಪರಿಶೀಲಿಸಲಾಗಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮಕ್ಕಳಿಗೆ 2010–11ನೇ ಸಾಲಿಗೆ ನೀಡಿದ್ದ ಅನುದಾನ ರೂ. 10.25 ಲಕ್ಷಗಳು ಬಿಡುಗಡೆಯಾಗಿದ್ದರೂ ಕೂಡ ಇಲ್ಲಿಯವರೆಗೂ ಶಾಲೆಗಳಿಗೆ ಬ್ಯಾಗ್ ಮತ್ತು ಬುಕ್ ಗಳನ್ನು ಪೂರೈಸುವ ಕೆಲಸ ಆಗಿಲ್ಲ. ಇದು ಕ್ಷೇತ್ರ ಶಿಕ್ಷಣಾಧಿಕಾರಿಗಳ ವೈಫಲ್ಯ ಮತ್ತು 39 ಶಿಕ್ಷಕರ ನಿಯೋಜನೆಯನ್ನು ಮಾಡಿರುವುದು ಹಾಗೂ ಇದರಲ್ಲಿ ಕೆಲವು ಶಿಕ್ಷಕರುಗಳನ್ನು ಕಳೆದ 4 ವರ್ಷಗಳಿಂದ ಮುಂದುವರೆಸಲಾಗಿರುವುದು ಗಂಭೀರ ಸ್ವರೂಪದ ಕರ್ತವ್ಯ ಲೋಪವೆಂದು ಅಭಿಪ್ರಾಯಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ : 10–11–2011 ರ ಸರ್ಕಾರದ ಪತ್ರದಲ್ಲಿ ಅಪಾದಿತ ಶ್ರೀ ಜಿ.ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರ ವಿರುದ್ಧ ದೂರಿನ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) 1957 ರಡಿ ವಿಚಾರಣೆ ನಡೆಸುವ ಸಂಬಂಧ ದೋಷಾರೋಪಣಾ ಪಟ್ಟಿ ಅನುಬಂಧ 1–4ರವರೆಗೆ ಪೂರಕ ದಾಖಲೆಗಳೊಂದಿಗೆ ಕಳುಹಿಸುವಂತೆ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3) ರ ದಿನಾಂಕ : 28–11–2011 ರ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರು ಆರೋಪಿತ ಅಧಿಕಾರಿ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4 ರವರೆಗೆ ತಯಾರಿಸಿ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ : (4) ರ ದಿನಾಂಕ : 16–01–2012 ರಲ್ಲಿ ಅಪಾದಿತ ಅಧಿಕಾರಿ ಶ್ರೀ ಜಿ. ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರಿಗೆ ಅನುಬಂಧಗಳೊಡನೆ ದೋಷಾರೋಪಣಾ ಪಟ್ಟಿಯನ್ನು ಲಗತ್ತಿಸಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರಡಿ ಕಾರಣ ಕೇಳುವ ನೋಟಿಸ್ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ : (5) ರ ದಿನಾಂಕ : 25–02–2012 ರಪತ್ರದಲ್ಲಿ ಅಪಾದಿತ ಅಧಿಕಾರಿ ಶ್ರೀ ಜಿ. ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರು ತಮ್ಮ ರಕ್ಷಣಾ ಹೇಳಿಕೆಯಲ್ಲಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಶ್ರೀ ಜಿ. ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರು ತಮ್ಮ ರಕ್ಷಣಾ ಹೇಳಿಕೆಯಲ್ಲಿನ ಆರೋಪಗಳನ್ನು ನಿರಾಕರಿಸಿದ್ದರಿಂದ ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಕೂಲಂಕಷವಾಗಿ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ಮನಗಂಡು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957 ರ ನಿಯಮ 11 ರಡಿಯಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಲು ನಿರ್ಧರಿಸಿದ್ದು ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 54 ಡಿಜಿಓ 2011, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಟಿ. ತಳಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಗ್ರಾಮೀಣ ವಲಯ, ಬಿಜಾಪುರ ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11 (2) ರಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಶ್ರೀ ಡಿ. ವಿ. ಶೇಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಧಾರವಾಡ ಅವರನ್ನು ಈ ಪ್ರಕರಣದ ವಿಚಾರಣಾಧಿಕಾರಿಯಾಗಿಯೂ ಹಾಗೂ ನಿಯಮ 11(5)(ಸಿ) ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶಿಸಿದೆ.

ವಿಚಾರಣೆ ನಡೆಸಲು ಸ್ಥಳಾವಕಾಶವನ್ನು ನೀಡಲು ಹಾಗೂ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸೇವೆಯನ್ನು ವಿಚಾರಣಾಧಿಕಾರಿಗಳಿಗೆ ಒದಗಿಸಲು ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರಿಗೆ ಸೂಚಿಸಿದೆ.

ವಿಚಾರಣೆ ನಂತರ ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿದ ನಂತರ ಅವರಿಗೆ ರೂ. 15,000/– ಸಂಭಾವನೆ (ವಾಹನ ಭತ್ಯೆಯೂ ಸೇರಿರುತ್ತದೆ) ಪಾವತಿಸಲು ಸೂಚಿಸಿದೆ.

ವಿಚಾರಣಾಧಿಕಾರಿಗಳು ಪ್ರತಿ ಆರೋಪದ ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ, ಸ್ಪಷ್ಟ ನಿರ್ಣಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ 2 ತಿಂಗಳೊಳಗೆ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.924

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸಮಿತಿಗಳು & ಆಡಳಿತ)

## ಶಿಕ್ಷಣ ಸಚಿವಾಲಯ

ವಿಷಯ : ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ಪ್ರೌಢಶಾಲೆಗಳ ಸ್ಥಳಾಂತರ/ಹಸ್ತಾಂತರದ ಹೆಸರಿನಲ್ಲಿ ನಡೆದಿರುವ ಅಕ್ರಮಗಳಿಗೆ ಸಂಬಂಧಿಸಿದ ಅಧಿಕಾರಿ ನೌಕರರುಗಳ ವಿರುದ್ಧ ಕರ್ನಾಟಕ ನಾಗರೀಕ (ಸಿಸಿಎ) ಸೇವಾ ನಿಯಮಾವಳಿಗಳ ನಿಯಮ–13 ರಡಿಯಲ್ಲಿ ಜಂಟಿ ಶಿಸ್ತು ಕ್ರಮ – ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

ಓದಲಾಗಿದೆ :

1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಅ.ಸ. ಪತ್ರ : ಸನಿ (ಶಾ.ಶಿ) ದೂರು 2/2010–11 ದಿನಾಂಕ : 18–01–2011.
2. ಸರ್ಕಾರದ ಆದೇಶ ಸಂಖ್ಯೆ : ಇಡಿ 17 ಡಿಜಿಪಿ 2011 ದಿನಾಂಕ : 01–03–2011.
3. ಸರ್ಕಾರದ ಪತ್ರ ಸಂಖ್ಯೆ :ಇಡಿ 17 ಡಿಜಿಪಿ 2011, ದಿನಾಂಕ : 01–03–2011.
4. ಸರ್ಕಾರದ ಆದೇಶ ಸಂಖ್ಯೆ : ಇಡಿ 17 ಡಿಜಿಪಿ 2011, ದಿನಾಂಕ 03–03–2011.
5. ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 22 ಡಿಜಿಪಿ 2011, ದಿನಾಂಕ : 29–03–2011.
6. ಸರ್ಕಾರದ ಆದೇಶ ಸಂಖ್ಯೆ : ಇಡಿ 22 ಡಿಜಿಪಿ 2011 (ಭಾಗ), ದಿನಾಂಕ 23–04–2011.
7. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ : ಸಿ 2(3)ವಿ.ಶಿ. ಪ್ರ. 38/2010–11 (ಭಾಗ–03), ದಿನಾಂಕ : 08–08–2011.
8. ಕಡತ ಸಂಖ್ಯೆ : ಇಡಿ 19 ಡಿಜಿಪಿ 2011.
9. ಕಾರಣ ಕೇಳುವ ನೋಟೀಸು ಸಂಖ್ಯೆ : ಇಡಿ 17 ಡಿಜಿಪಿ 2011, ದಿನಾಂಕ : 22–08–2011.
10. ಸರ್ಕಾರದ ಆದೇಶ ಸಂಖ್ಯೆ : ಇಡಿ 17 ಡಿಜಿಪಿ 2011, ದಿನಾಂಕ : 22–08–2011ರ ಆದೇಶಗಳು.
11. ಸರ್ಕಾರದ ಆದೇಶ ಸಂಖ್ಯೆ : ಇಡಿ 17 ಡಿಜಿಪಿ 2011, ದಿನಾಂಕ : 22–08–2011.
12. ಶ್ರೀ ಎಲ್. ಬೋರಯ್ಯ, ಪ್ರಥಮ ದರ್ಜೆಸಹಾಯಕ, ಆಯುಕ್ತರ ಕಛೇರಿ, ಬೆಂಗಳೂರು, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 13–09–2011.
13. ಶ್ರೀ ಸಿ.ಬಿ. ಜಯರಂಗ, ಕ್ಷೇತ್ರ ಶಿಕ್ಷಣಾಧಿಕಾರಿ, ಬೆಂಗಳೂರು ಉತ್ತರ ವಲಯ–4, ಬೆಂಗಳೂರು, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 13–09–2011.
14. ಶ್ರೀ ಕೆ. ಎನ್. ಜಯಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೀರೂರು, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 10–10–2011.
15. ಶ್ರೀ ಸಿ. ಆರ್. ಪರಮೇಶ್ವರಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ತರೀಕೆರೆ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 12–12–2011.

16. ಶ್ರೀ ಸಿ. ಆರ್. ಬೆಟ್ಟೇಗೌಡ, ಪ್ರಥಮ ದರ್ಜೆ ಸಹಾಯಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಕೃಷ್ಣರಾಜಪೇಟೆ, ಮಂಡ್ಯ ಜಿಲ್ಲೆ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 31–12–2011.
17. ಶ್ರೀ ಸಿ. ಎನ್. ಲೋಕೇಶ್, ಪ್ರಥಮ ದರ್ಜೆ ಸಹಾಯಕ, ಸರ್ಕಾರಿ ಪ್ರೌಢಶಾಲೆ, ಬೆಳವಾಡಿ, ಅರಕಲಗೂಡು ತಾ : ಹಾಸನ ಜಿಲ್ಲೆ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 10–01–2012
18. ಶ್ರೀಮತಿ ಪಿ ಪದ್ಮಮ್ಮ, ಪ್ರಾಂಶುಪಾಲರು, ಡಯಟ್, ಹಾಸನ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 10–01–2012.
19. ಶ್ರೀಮತಿ ವೈ.ಎಂ. ನೂರ್ ಜಹಾನ್ ಬೀ, ನಿವೃತ್ತ ಪತ್ರಾಂಕಿತ ಸಹಾಯಕರು, ಹಾಸನ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 11–01–2012.
20. ಶ್ರೀಮತಿ ಲಲಿತಾ.ಬಿ, ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಹಾಸನ ತಾ॥ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 16–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1) ರ ಪತ್ರದಲ್ಲಿ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ಪ್ರೌಢಶಾಲೆಗಳ ಸ್ಥಳಾಂತರ/ಹಸ್ತಾಂತರ ಹೆಸರಿನಲ್ಲಿ ನಡೆದಿರುವ ಅಕ್ರಮಗಳಿಗೆ ಸಂಬಂಧಿಸಿದ ಅಧಿಕಾರಿ ನೌಕರರ ವಿರುದ್ಧ ಬಂದಿದ್ದ ದೂರುಗಳ ಬಗ್ಗೆ ಪ್ರಾಥಮಿಕ ವಿಚಾರಣಾ ವರದಿಯಲ್ಲಿ ಅವರುಗಳ ಮೇಲಿನ ದೂರುಗಳು ಮೇಲ್ನೋಟಕ್ಕೆ ಸಾಬೀತಾಗಿವೆ ಎಂದು ವರದಿ ಮಾಡಲಾಗಿದ್ದು ಈ ಕೆಳಕಂಡ ಶಾಲೆಗಳು ಸುಳ್ಳು ದಾಖಲೆ ಸೃಷ್ಟಿಸಿ ಮಾನ್ಯತೆ ನವೀಕರಿಸಿಕೊಂಡಿರುವುದು ವರದಿಯಲ್ಲಿ ತಿಳಿಸಲಾಗಿತ್ತು.

1. ಶ್ರೀ ಬಸವೇಶ್ವರ ಪ್ರೌಢಶಾಲೆ, ಕೆಂಚಾಪುರ ಗೇಟ್, ತರೀಕೆರೆ ತಾಲ್ಲೂಕು, ಬೀರೂರು ವಲಯ ಚಿಕ್ಕಮಗಳೂರು ಜಿಲ್ಲೆ.
2. ಶ್ರೀ ವಿಜೇಂದ್ರ ಪ್ರೌಢಶಾಲೆ, ಮಧುರನಹಳ್ಳಿ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ.
3. ಶ್ರೀ ನರಸಿಂಹಸ್ವಾಮಿ ಪ್ರೌಢಶಾಲೆ, ಯಗಟಿ ಗ್ರಾಮ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

ಮೇಲಿನ ಶಾಲೆಗಳು ನಿಯಾಮಾನುಸಾರ ಇದೆಯೇ ಇಲ್ಲವೆ ಎಂಬ ಬಗ್ಗೆ ಸರಿಯಾಗಿ ಪರಿಶೀಲಿಸದೇ ಚಿಕ್ಕಮಗಳೂರು ಜಿಲ್ಲಾ ಉಪ ನಿರ್ದೇಶಕರು ಈ ಶಾಲೆಗಳನ್ನು ಅನುದಾನಕ್ಕೆ ಒಳಪಡಿಸಲು ಪ್ರಸ್ತಾವನೆ ಸಲ್ಲಿಸಿರುವುದರಿಂದ ಹಾಗೂ ಈ ಕೆಳಕಂಡ ಶಾಲೆಗಳು ಸ್ಥಳಾಂತರಿಸಲು ಆಡಳಿತ ಮಂಡಳಿಯೊಂದಿಗೆ ಶಾಮೀಲಾಗಿರುವರೆಂಬ ದೂರಿನಲ್ಲಿ ಸತ್ಯಾಂಶವಿದೆಯೆಂದು ವರದಿ ಮಾಡಲಾಗಿತ್ತು.

1. ಶ್ರೀ ರಾಮೇಶ್ವರ ಪ್ರೌಢಶಾಲೆ, ದುಗ್ಲಾಪುರ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.
2. ಶ್ರೀ ಚೌಡೇಶ್ವರಿ ಪ್ರೌಢಶಾಲೆ, ಗೋಪಾಲಭೂಸೇನಹಳ್ಳಿ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.
3. ಶೃತಿ ಪ್ರೌಢಶಾಲೆ (ಬಳೆ ನಿರಾಲಮ್ಮ ಪ್ರೌಢಶಾಲೆ) ಭೂತೇನಹಳ್ಳಿ, ತರೀಕರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

ಮೇಲ್ಕಂಡ ಶಾಲೆಗಳಲ್ಲದೆ ಕುವೆಂಪು ಪ್ರೌಢಶಾಲೆ, ಗೆಂಡೆಹಳ್ಳಿ, ಬೇಲೂರು ತಾಲ್ಲೂಕು ಹಾಸನ ಜಿಲ್ಲೆ ಮತ್ತು ಶ್ರೀ ಶಶೀಂದ್ರ ವಸತಿ ಪ್ರೌಢಶಾಲೆ, ಕೆರೆಹಳ್ಳಿ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಈ ಶಾಲೆಗಳನ್ನು ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿಗೆ ಸ್ಥಳಾಂತರಿಸುವ ಪ್ರಸ್ತಾವನೆಯನ್ನು ಸುಳ್ಳು ದಾಖಲೆಗಳನ್ನು ಸೃಷ್ಟಿಸಲು ಸಂಬಂಧಿಸಿದ ಉಪ ನಿರ್ದೇಶಕರು ಹಾಗೂ ಅವರ ಕಛೇರಿಯ ಸಿಬ್ಬಂದಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಕಛೇರಿ ಸಿಬ್ಬಂದಿಗಳು ಕಾರಣರೆಂಬ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಿ, ಈ ಹಿಂದೆ ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಹಿಂದಿನ ಉಪ ನಿರ್ದೇಶಕರು ಹಾಗೂ ಚಿಕ್ಕಮಗಳೂರು ಜಿಲ್ಲೆಯ ಹಾಲಿ ನಿರ್ದೇಶಕರುಗಳು ನಿಯಮಬಾಹಿರ ಕರ್ತವ್ಯ ನಿರ್ವಹಣೆ ಕಾರಣವೆಂದು ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರನ್ವಯ ಶಿಸ್ತು ಕ್ರಮ ಜರುಗಿಸುವುದು ಅವಶ್ಯವೆಂದು ಸರ್ಕಾರವು ಭಾವಿಸಿ, ಮೇಲ್ಕಂಡ ಶಾಲೆಗಳ ಮಾನ್ಯತೆ ನವೀಕರಣ ಮತ್ತು ಸ್ಥಳಾಂತರ ಪ್ರಸ್ತಾವನೆಗಳ ಸುಳ್ಳು ದಾಖಲೆಗಳನ್ನು ಸೃಷ್ಟಿಸುವಲ್ಲಿ ಈ ಕೆಳಕಂಡ ಅಧಿಕಾರಿಗಳು ಹೊಣೆಗಾರರೆಂದು ಗುರುತಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಅವರುಗಳ ಮೇಲೆ ಶಿಸ್ತು ಕ್ರಮ ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರ ನಿಯಮ–10ರನ್ವಯ ಅಮಾನತ್ತುಗೊಳಿಸಲಾಗಿತ್ತು.

1. ಶ್ರೀಮತಿ ಪಿ. ಪದ್ಮಮ್ಮ, ಹಿಂದಿನ ಉಪ ನಿರ್ದೇಶಕರು (ಆಡಳಿತ) ಸಾಶಿಇ ಹಾಸನ ಜಿಲ್ಲೆ (ಹಾಲಿ ಉಪ ನಿರ್ದೇಶಕರು, ಅಪರ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ).
2. ಶ್ರೀ ಮಂಟೇಲಿಂಗಾಚಾರಿ ಹಿಂದಿನ ಉಪ ನಿರ್ದೇಶಕರು (ಆಡಳಿತ) ಸಾಶಿಇ ಚಿಕ್ಕಮಗಳೂರು ಜಿಲ್ಲೆ (ಹಾಲಿ ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಕೊಪ್ಪಳ ಜಿಲ್ಲೆ).
3. ಶ್ರೀ ಎಲ್. ರಂಗಪ್ಪ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ಚಿಕ್ಕಮಗಳೂರು ಜಿಲ್ಲೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಈ ಪ್ರಕರಣದಲ್ಲಿ ಭಾಗಿಯಾಗಿದ್ದರೆನ್ನಲಾದ ಸಂಬಂಧಿಸಿದ ಜಿಲ್ಲಾ, ಆಯುಕ್ತಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಸೇರಿದಂತೆ ಜಿಲ್ಲಾ ಉಪ ನಿರ್ದೇಶಕರ ಕಛೇರಿ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಅಧಿಕಾರಿ ಸಿಬ್ಬಂದಿಗಳ ಹೆಸರುಗಳನ್ನು ಗುರುತಿಸಿ, ಸರ್ಕಾರಕ್ಕೆ ಒದಗಿಸುವಂತೆಕೋರಲಾಗಿತ್ತು.

ಅನಂತರ ಈ ಪ್ರಕರಣದಲ್ಲಿ ಭಾಗಿಯಾಗಿದ್ದರೆಂದು ಗುರುತಿಸಲಾದ ಅಧಿಕಾರಿಗಳ ಪೈಕಿ ಶ್ರೀಮತಿ ನೂರ್‌ಜಹಾನ್ ಬೀ, ಇವರು ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ ಅವರನ್ನು ಹೊರತುಪಡಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಈ ಕೆಳಕಂಡ ಅಧಿಕಾರಿಗಳನ್ನು ಅವರುಗಳ ಮೇಲಿನ ಶಿಸ್ತು ಕ್ರಮ ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ–10ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೂ ಅಮಾನತ್ತುಗೊಳಿಸಲಾಗಿತ್ತು.

1. ಶ್ರೀ ಸಿ. ಆರ್. ಪರಮೇಶ್ವರಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ತರೀಕೆರೆ ತಾಲ್ಲೂಕು.
2. ಶ್ರೀ ಜಯಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಬೀರೂರು ವಲಯ, ಕಡೂರು ತಾಲ್ಲೂಕು
3. ಶ್ರೀಮತಿ ಬಿ. ಲಲಿತಾ, ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಹಾಸನ.

4. ಶ್ರೀ ಸಿ.ಎನ್. ಲೋಕೇಶ್, ಪ್ರಭಾರಿ ಅಧೀಕ್ಷಕರು, ಉಪ ನಿರ್ದೇಶಕರ ಕಛೇರಿ, ಸಾಶಿಇ, ಹಾಸನ
5. ಶ್ರೀ ಬೆಟ್ಟೇಗೌಡ, ಪ್ರಥಮ ದರ್ಜೆ ಸಹಾಯಕ, ಉಪ ನಿರ್ದೇಶಕರ ಕಛೇರಿ, ಸಾಶಿಇ, ಹಾಸನ

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಶ್ರೀ ಸಿ. ಆರ್. ಪರಮೇಶ್ವರಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ತರೀಕೆರೆ ವಲಯ, ಚಿಕ್ಕಮಗಳೂರು ಜಿಲ್ಲೆ ಮತ್ತು ಶ್ರೀ ಕೆ. ಎನ್. ಜಯಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಬೀರೂರು ವಲಯ, ಚಿಕ್ಕಮಗಳೂರು ಜಿಲ್ಲೆ, ಇವರುಗಳ ಮೇಲಿನ ಆರೋಪಗಳಿಗೆ ಇಲಾಖಾ ವಿಚಾರಣೆ ಹಾಗೂ ಶಿಸ್ತು ಕ್ರಮ ಕಾಯ್ದಿರಿಸಿ ಅಮಾನತ್ತು ತೆರವುಗೊಳಿಸಿ, ಸೇವೆಗೆ ಮನರ್ ಸ್ಥಾಪಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (10) ರ ಆದೇಶಗಳಲ್ಲಿ ಶ್ರೀ ಎಲ್. ರಂಗಪ್ಪ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕಮಗಳೂರು, ಇವರು ದಿನಾಂಕ : 30-06-2011 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ, ಹಾಗೂ ಶ್ರೀಮತಿ ನೂರ್ ಜಹಾನ್ ಬೀ, ನಿವೃತ್ತ ಪತ್ರಾಂಕಿತ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಸನ. ಇವರು ಈಗಾಗಲೇ ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುವ ಕಾರಣ, ಸದರಿಯವರುಗಳ ಮೇಲಿನ ಆರೋಪಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ರ ನಿಯಮ-214 ರಡಿ ಶಿಸ್ತು ಕ್ರಮ ಜರುಗಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಈ ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷತೆ ತೋರಿದ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ-11 ಮತ್ತು 13 ರಡಿಯಲ್ಲಿ ಜಂಟಿ ಶಿಸ್ತುಕ್ರಮ ಕೈಗೊಳ್ಳಲು ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ-1 ರಿಂದ 4 ನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

1. ಶ್ರೀಮತಿ ಪದ್ಮಮ್ಮ, ರೀಡರ್, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು.
2. ಶ್ರೀ ಮಂಟೇಲಿಂಗಾಚಾರ್, ಉಪ ನಿರ್ದೇಶಕರು (ಆಡಳಿತ) ಕೊಪ್ಪಳ ಜಿಲ್ಲೆ
3. ಶ್ರೀ ಎಲ್. ರಂಗಪ್ಪ, ನಿವೃತ್ತ ಉಪ ನಿರ್ದೇಶಕರು, ಚಿಕ್ಕಮಗಳೂರು ಜಿಲ್ಲೆ
4. ಶ್ರೀ ಸಿ. ಆರ್. ಪರಮೇಶ್ವರಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ತರೀಕೆರೆ ವಲಯ.
5. ಶ್ರೀ ಕೆ. ಎನ್. ಜಯಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಬೀರೂರು ವಲಯ.
6. ಶ್ರೀ ಸಿ.ಬಿ. ಜಯರಂಗ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ-4, ಯಲಹಂಕ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
7. ಶ್ರೀಮತಿ ನೂರ್ ಜಹಾನ್ ಬಿ. ನಿವೃತ್ತ ಹಿಂದಿನ ಪತ್ರಾಂಕಿತ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಹಾಸನ.
8. ಶ್ರೀಮತಿ ಲಲಿತಾ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಹಾಸನ.
9. ಶ್ರೀ ಎಲ್. ಬೋರಯ್ಯ, ಪ್ರಥಮ ದರ್ಜೆ ಸಹಾಯಕರು, ಆಯುಕ್ತರ ಕಛೇರಿ, ಬೆಂಗಳೂರು.
10. ಶ್ರೀ ಸಿ. ಎನ್. ಲೋಕೇಶ್, (ಅಮಾನತ್ತಿನಲ್ಲಿ) ಪ್ರಥಮ ದರ್ಜೆ ಸಹಾಯಕ, ಉಪ ನಿರ್ದೇಶಕರ ಕಛೇರಿ, ಹಾಸನ.
11. ಶ್ರೀ ಬೆಟ್ಟೇಗೌಡ, (ಅಮಾನತ್ತಿನಲ್ಲಿ) ಪ್ರಥಮ ದರ್ಜೆ ಸಹಾಯಕ, ಉಪ ನಿರ್ದೇಶಕರ ಕಛೇರಿ, ಹಾಸನ.

ಮುಂದುವರೆದು ಇಂತಹದೇ ಪ್ರಕರಣದಲ್ಲಿ ಭಾಗಿಯಾಗಿದ್ದರೆನ್ನಲಾದ ಶ್ರೀ ಜಿ. ರಂಗನಾಥಸ್ವಾಮಿ, ಕ್ಷೇತ್ರ ಶಿಕ್ಷಣಾಧಿಕಾರಿ, ಕಡೂರು, ಚಿಕ್ಕಮಗಳೂರು ಜಿಲ್ಲೆ, ಇವರಿಗೆ ಸಂಬಂಧಿಸಿದಂತೆ ಶಿಸ್ತು ಕ್ರಮ ಜರುಗಿಸುವ ಕುರಿತು ಮೇಲೆ ಓದಲಾದ ಕ್ರಮ ಸಂಖ್ಯೆ (8) ರಲ್ಲಿ ಸದರಿಯವರ ಹೆಸರನ್ನು ಸಹ ಜಂಟಿ ಶಿಸ್ತುಕ್ರಮದಲ್ಲಿ ಸೇರ್ಪಡೆ ಮಾಡಲು ಅನುಮೋದನೆ ಪಡೆದುಕೊಳ್ಳಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಶ್ರೀಮತಿ ಬಿ. ಲಲಿತಾ ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಹಾಸನ ಇವರ ವಿರುದ್ಧ ಶಿಸ್ತು ಕ್ರಮ ಕಾಯ್ದಿರಿಸಿ, ಸೇವೆಗೆ ಮನರ್ ಸ್ಥಾಪಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (11) ರಲ್ಲಿ ಶ್ರೀ ಸಿ. ಎನ್. ಲೋಕೇಶ್ ಮತ್ತು ಶ್ರೀ ಸಿ. ಆರ್. ಬೆಟ್ಟೇಗೌಡ, ಪ್ರಥಮ ದರ್ಜೆ ಸಹಾಯಕ, ಇವರುಗಳ ವಿರುದ್ಧ ಶಿಸ್ತು ಕ್ರಮ ಕಾಯ್ದಿರಿಸಿ, ಸೇವೆಗೆ ಮನರ್ ಸ್ಥಾಪಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9) ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಆಧರಿಸಿ ಪ್ರಕರಣದ ಗಂಭೀರತೆಯ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಆರೋಪಿತರೆಂದು ಗುರುತಿಸಲಾಗಿರುವ ಒಟ್ಟು 12 ಅಧಿಕಾರಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರ ನಿಯಮ-11 ಮತ್ತು 13 ರಡಿ ಜಂಟಿ ಶಿಸ್ತು ಕ್ರಮ ಜರುಗಿಸಲು ಕಾರಣ ಕೇಳುವ ನೋಟೀಸುಗಳನ್ನು ಜಾರಿಗೊಳಿಸಲಾಗಿತ್ತು. ಆರೋಪಿತ ಅಧಿಕಾರಿ/ನೌಕರರು ನಿಗಧಿತ ಕಾಲಾವಧಿಯಲ್ಲಿ ಅಧಿಕಾರಿ ಪ್ರತಿರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿರುವುದಿಲ್ಲ. ಆದರೆ, 07 ಆರೋಪಿತ ಅಧಿಕಾರಿ ನೌಕರರುಗಳ ಮೇಲೆ ಓದಲಾದ ಕ್ರಮ ಸಂಖ್ಯೆ (12) ರಿಂದ (20) ರವರೆಗೆ ಸಲ್ಲಿಸಿರುವ ಲಿಖಿತ ಹೇಳಿಕೆಗಳಲ್ಲಿ ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದು ತಮ್ಮನ್ನು ಆರೋಪದಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ. ಹಾಗೂ ಉಳಿದ 05 ಅಧಿಕಾರಿ ನೌಕರರುಗಳು ತಮ್ಮ ಪ್ರತಿರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿರುವುದಿಲ್ಲ. ಆನಂತರ ಶ್ರೀಮತಿ ವೈ.ಎಂ.ನೂರ್ ಜಹಾನ್ ಬೀ. ನಿವೃತ್ತ ಪತ್ರಾಂಕಿತ ಸಹಾಯಕರು ಮತ್ತು ಶ್ರೀಮತಿ ಬಿ. ಲಲಿತಾ, ಪತ್ರಾಂಕಿತ ವ್ಯವಸ್ಥಾಪಕರು ಇವರು ತಮ್ಮ ಪ್ರತಿರಕ್ಷಣಾ ಹೇಳಿಕೆಗಳನ್ನು ದಿನಾಂಕ : 11-01-2012 ಮತ್ತು 16-01-2012 ರಲ್ಲಿ ಸಲ್ಲಿಸಿದ್ದಾರೆ.

ಈ ಪ್ರಕರಣದಲ್ಲಿ ಆರೋಪಿತ ಅಧಿಕಾರಿಗಳು ಸಲ್ಲಿಸಿರುವ ತಮ್ಮ ಪ್ರತಿರಕ್ಷಣಾ ಹೇಳಿಕೆಗಳಲ್ಲಿ ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿರುವುದರಿಂದ ಹಾಗೂ ಮೂವರು ಅಧಿಕಾರಿಗಳು ಪ್ರತಿರಕ್ಷಣಾ ಹೇಳಿಕೆಗಳನ್ನು ಸಲ್ಲಿಸದೇ ಇರುವುದರಿಂದ ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ವಿಚಾರಣೆ ಮಾಡುವುದು ಸೂಕ್ತವೆಂದು ನಿರ್ಣಯಿಸಿ, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957 ರ ನಿಯಮ-11 ಹಾಗೂ 13 ರ ಅಡಿಯಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಲು ಸೂಕ್ತವೆಂದು ನಿರ್ಧರಿಸಿ ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 17 ಡಿಜಿಪಿ 2011, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2012**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿ ಪ್ರೌಢಶಾಲೆಗಳ ಸ್ಥಳಾಂತರ/ಹಸ್ತಾಂತರದ ಹೆಸರಿನಲ್ಲಿ ನಡೆದಿರುವ ಅಕ್ರಮಗಳಿಗೆ ಸಂಬಂಧಿಸಿದ ಪ್ರಕರಣದಲ್ಲಿ ಕರ್ತವ್ಯ ನಿರ್ಲಕ್ಷತೆ ತೋರಿದ ಈ ಕೆಳಕಂಡ ಅಧಿಕಾರಿಗಳ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ-11 ಮತ್ತು 13 ರಡಿ ಇಲಾಖಾ ವಿಚಾರಣೆ ನಡೆಸಲು ನಿಯಮ-11 (2) ರಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಶ್ರೀ ಕುಕ್ಕಾಜಿ ರಾಮಕೃಷ್ಣಭಟ್, ವಿಚಾರಣಾಧಿಕಾರಿ, ನಿವೃತ್ತ ನ್ಯಾಯಾಧೀಶರು, ನಂ. 2, 1ನೇ ಕ್ರಾಸ್, ಜುಡಿಷಿಯಲ್ ಲೇಔಟ್, ಸಂಜಯನಗರ, ಬೆಂಗಳೂರು-560 094 ಇವರನ್ನು ಈ

ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ನಿಯಮ–11 (5) ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಸವೇಗೌಡ, ಪ್ರಾಂಶುಪಾಲರು, ಡಯಟ್, ಚಿಕ್ಕಮಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶಿಸಿದೆ.

1. ಶ್ರೀಮತಿ ಪದ್ಮಮ್ಮ, ರೀಡರ್, ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು.
2. ಶ್ರೀ ಮಂಟೇಲಿಂಗಾಚಾರ್, ಉಪ ನಿರ್ದೇಶಕರು (ಆಡಳಿತ) ಕೊಪ್ಪಳ ಜಿಲ್ಲೆ.
3. ಶ್ರೀ ಎಲ್. ರಂಗಪ್ಪ, ನಿವೃತ್ತ ಉಪ ನಿರ್ದೇಶಕರು, ಚಿಕ್ಕಮಗಳೂರು ಜಿಲ್ಲೆ.
4. ಶ್ರೀ ಸಿ. ಆರ್. ಪರಮೇಶ್ವರಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ತರೀಕೆರೆ ವಲಯ.
5. ಶ್ರೀ ಕೆ. ಎನ್. ಜಯಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಬೀರೂರು ವಲಯ.
6. ಶ್ರೀ ಸಿ. ಬಿ. ಜಯರಂಗ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ–4, ಯಲಹಂಕ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
7. ಶ್ರೀಮತಿ ನೂರ್ ಜಹಾನ್ ಬಿ. ನಿವೃತ್ತ ಹಿಂದಿನ ಪತ್ರಾಂಕಿತ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಹಾಸನ.
8. ಶ್ರೀಮತಿ ಲಲಿತಾ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಹಾಸನ.
9. ಶ್ರೀ ಎಲ್. ಬೋರಯ್ಯ, ಪ್ರಥಮ ದರ್ಜೆ ಸಹಾಯಕರು, ಆಯುಕ್ತರ ಕಛೇರಿ, ಬೆಂಗಳೂರು.
10. ಶ್ರೀ ಸಿ. ಎನ್. ಲೋಕೇಶ್, ಪ್ರಥಮ ದರ್ಜೆ ಸಹಾಯಕ, ಸರ್ಕಾರಿ ಪ್ರೌಢಶಾಲೆ, ಬೆಳವಾಡಿ, ಅರಕಲಗೂಡು ತಾ : ಹಾಸನ ಜಿಲ್ಲೆ.
11. ಶ್ರೀ ಸಿ. ಆರ್. ಬೆಟ್ಟೇಗೌಡ, ಪ್ರಥಮ ದರ್ಜೆ ಸಹಾಯಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಕೃಷ್ಣರಾಜಪೇಟೆ, ಮಂಡ್ಯ ಜಿಲ್ಲೆ.
12. ಶ್ರೀ ಜಿ. ರಂಗನಾಥಸ್ವಾಮಿ, ಕ್ಷೇತ್ರ ಶಿಕ್ಷಣಾಧಿಕಾರಿ, ಕಡೂರು ವಲಯ.

ವಿಚಾರಣೆ ನಡೆಸಲು ಸ್ಥಳಾವಕಾಶ ಹಾಗೂ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸೇವೆಯನ್ನು ವಿಚಾರಣಾಧಿಕಾರಿಗೆ ಒದಗಿಸಲು ಹಾಗೂ ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ ನಂತರ ಅವರಿಗೆ ಸಂಭಾವನೆಯನ್ನು ಮತ್ತು ಸಾರಿಗೆ ಭತ್ಯೆಯನ್ನು ಸೇರಿದಂತೆ ಒಟ್ಟು ರೂ. 15,000/– (ರೂ. ಹದಿನೈದು ಸಾವಿರ ಮಾತ್ರ) ಮಂಜೂರು ಮಾಡುವಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಸೂಚಿಸಿದೆ.

ವಿಚಾರಣಾಧಿಕಾರಿಗಳು ಪ್ರತಿ ಆರೋಪದ ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ, ಸ್ಪಷ್ಟ ನಿರ್ಣಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ 2 ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.925

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಆಡಳಿತ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಮತ್ತು ಹೂಡಿಕೆ ಆಯುಕ್ತರು, ಕರ್ನಾಟಕ ಎಂಬ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.–

**ಓದಲಾಗಿದೆ:** ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಡತ ಸಂಖ್ಯೆ: ಸಿಐ 65 ಎಸ್‌ಪಿಐ 2012ರ ಟಿಪ್ಪಣಿ

**ಪ್ರಸ್ತಾವನೆ:**

ಮೇಲೆ ಓದಲಾದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಡತದಲ್ಲಿ ಜೂನ್ 2012ರಲ್ಲಿ ನಡೆಯಲಿರುವ GIM-2012 (Global Investors Meet, 2012) ಕಾರ್ಯಕ್ರಮದ ಅಂಗವಾಗಿ ಬಂಡವಾಳ ಹೂಡಿಕೆದಾರರ ಮತ್ತು FICCI,CII ಮತ್ತು ಕೇಂದ್ರ ಸರ್ಕಾರದ ವಿದೇಶಾಂಗ ವ್ಯವಹಾರಗಳ ಮಂತ್ರಾಲಯಗಳೊಂದಿಗೆ ಕರ್ನಾಟಕ ರಾಜ್ಯದ ಪರವಾಗಿ ಸಮನ್ವಯ ನಡೆಸುವ/ಚರ್ಚಿಸಲು ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರನ್ನು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕೈಗಾರಿಕೆ/ಹೂಡಿಕೆ. ಕರ್ನಾಟಕ ಸರ್ಕಾರ ಎಂದು ಮರು ಪದನಾಮೀಕರಿಸಲು ಕೋರಿರುತ್ತಾರೆ. ಆದರೆ, ತಾಂತ್ರಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ GIM-2012 ಮುಗಿಯುವವರೆಗೆ ತಾತ್ಕಾಲಿಕವಾಗಿ ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಮತ್ತು ಹೂಡಿಕೆ ಆಯುಕ್ತರು, ಕರ್ನಾಟಕ ಎಂಬ ಹೊಸ ಹುದ್ದೆಯನ್ನು ಸೃಜಿಸಿ, ಈ ಹುದ್ದೆಯ ಹೆಚ್ಚುವರಿ ಪ್ರಭಾರವನ್ನು ನಿವಾಸಿ ಆಯುಕ್ತರು, ನವದೆಹಲಿ ಇವರಿಗೆ ವಹಿಸಲು ಪ್ರಸ್ತಾಪಿಸಿದ್ದು. ಈ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಸಹಮತಿ ವ್ಯಕ್ತಪಡಿಸಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು; ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 175 ಸಅಸೇ 2012, ಬೆಂಗಳೂರು, ದಿನಾಂಕ 15–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2012ರ GIM ಅಂಗವಾಗಿ ಬಂಡವಾಳ ಹೂಡಿಕೆದಾರರ ಮತ್ತು ಸರ್ಕಾರದ ಮಧ್ಯೆ ಸಮನ್ವಯ ನಡೆಸಲು ಸದರಿ 2012ರ GIM ಮುಗಿಯುವವರೆಗೆ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಮತ್ತು ಹೂಡಿಕೆ ಆಯುಕ್ತರು, ಕರ್ನಾಟಕ ಎಂಬ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಸದರಿ ಹುದ್ದೆಯಲ್ಲಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರನ್ನು ಹೆಚ್ಚುವರಿ ಪ್ರಭಾರದಲ್ಲಿರಿಸಿ, ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1159 ಪ್ರ.ಕಾ/2012, ದಿನಾಂಕ 7–3–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 926

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)